ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ಗಿರಿಜನ ಅಭಿವೃದ್ಧಿ ಯೋಜನೆಯ ಬಗ್ಗೆ

ಶ್ರೀ ಐವನ್ ಡಿ' ಸೋಜಾ (ನಾಮನಿರ್ದೇಶನ ಹೊಂದಿದವರು) :-

596 (641) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಒಟ್ಟು ಎಷ್ಟು ಕೊರಗ ಕುಟುಂಬಗಳಿವೆ ; ಗಿರಿಜನ ಅಭಿವೃದ್ಧಿ ಯೋಜನೆ ಅನ್ವಯ ಯಾವ ಯೋಜನೆಗಳನ್ನು ಕೊರಗ ಕುಟುಂಬಗಳಿಗೆ ನೀಡಲಾಗುತ್ತಿದೆ ; (ವಿವರ ನೀಡುವುದು)

(ಆ) ಕೊರಗ ಕುಟುಂಬಗಳು ಮತ್ತು ಸಂತತಿ ನಶಿಸಿ ಹೋಗುತ್ತಿದ್ದು, ಆ ಕುಟುಂಬಗಳಲ್ಲಿ ಪಡೆಯುತ್ತಿರುವ ಶಿಕ್ಷಣದ ಬಗ್ಗೆ ಮತ್ತು ಉದ್ಯೋಗ ಒದಗಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; (ಜಿಲ್ಲಾವಾರು ವಿವರ ನೀಡುವುದು)

(ಇ) 10 ನೇ ತರಗತಿಯಿಂದ ಪದವಿಪೂರ್ವ ಮತ್ತು ಪದವಿ ವ್ಯಾಸಂಗ ಮಾಡಿದ ಕೊರಗ ಕುಟುಂಬದ ವಿವರ ನೀಡುವುದು;

(ಈ) ಕೊರಗ ಮಕ್ಕಳಿಗೆ ಉದ್ಯೋಗ ಒದಗಿಸಲು ಸರ್ಕಾರದ ಮುಂದಿರುವ ವಿಶೇಷ ಯೋಜನೆಗಳು ಯಾವುವು ; ಇದ್ದರೆ, ವಿವರ ನೀಡುವುದು; ಕೊರಗ ಸಮಾಜದ ಜನ ಜೀವನದ ಬಗ್ಗೆ ವರದಿ ಪಡೆಯಲಾಗಿದೆಯೇ ? (ವಿವರ ನೀಡುವುದು)